KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೩ | ಬೆಂಗಳೂರು, ಗುರುವಾರ ಅಕ್ಟೋಬರ್ ೩೦, ೨೦೦೮ (ಕಾರ್ತೀಕ ೮, ಶಕ ವರ್ಷ ೧೯೩೦) | ಸಂಚಿಕೆ ೪೩ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕಂದಾಯ ಸಚಿವಾಲಯ**

**ವಿಷಯ :** ಶೇಕಡಾ 75% ರಷ್ಟು ಹಾಗೂ ಅದಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿರುವ ವ್ಯಕ್ತಿಗಳಿಗೆ ಮಾಹೆಯಾನ ರೂ. 1000/– ಮಾಸಾಶನ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 134 ಎಂಎಸ್‌ಟಿ 2007, ದಿನಾಂಕ 10–9–2007.

2. ಸರ್ಕಾರಿ ಆದೇಶ ಸಂಖ್ಯೆ: ಮಮಇ/107/ಪಿ.ಹೆಚ್.ಪಿ. 2003, ದಿನಾಂಕ 11ನೇ ಜುಲೈ 2003.

2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಶೇಕಡಾ 75% ರಷ್ಟು ಹಾಗೂ ಅದಕ್ಕಿಂತ ಹೆಚ್ಚಿನ ಅಂಗವೈಕಲ್ಯ ಅನುಭವಿಸುತ್ತಿರುವ ಅಂಗವಿಕಲರಿಗೆ ಹಾಲಿ ನೀಡುತ್ತಿರುವ ರೂ. 400.00ಗಳ ಮಾಸಾಶನವನ್ನು ರೂ. 1000.00ಕ್ಕೆ ಹೆಚ್ಚಿಸಲು ಘೋಷಿಸಲಾಗಿದೆ.

ಓದಲಾದ ಕ್ರಮ ಸಂಖ್ಯೆ (1)ರಂತೆ ಪ್ರಸ್ತುತ ಶೇಕಡಾ 40 ಹಾಗೂ ಅದಕ್ಕಿಂತ ಹೆಚ್ಚು ಅಂಗವಿಕಲತೆಯುಳ್ಳ ಅಂಗವಿಕಲರಿಗೆ ಮಾಹೆಯಾನ ಮಾಶಾಸನವನ್ನು ರೂ. 200.00 ಗಳಿಂದ ರೂ. 400.00 ಗಳ ನೀಡಲಾಗುತ್ತಿದೆ.

ಓದಲಾದ ಕ್ರಮ ಸಂಖ್ಯೆ (2)ರಂತೆ ವಿವಿಧ ಬಗೆಯ ಅಂಗವಿಕಲತೆಗಳನ್ನು ಗುರುತಿಸಿ ಅಂಗವಿಕಲ ಪ್ರಮಾಣ ಪತ್ರಗಳನ್ನು ನೀಡಲು ವೈದ್ಯಕೀಯ ಮಂಡಳಿಗಳನ್ನು ರಚಿಸಲಾಗಿರುತ್ತದೆ.

ಈ ಯೋಜನೆಯಡಿ ಹಾಲಿ ಮಾಶಾಸನ ಪಡೆಯುತ್ತಿರುವ ಹಾಗೂ ಶೇಕಡಾ 75% ರಷ್ಟು ಹಾಗೂ ಅದಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿರುವುದಕ್ಕಾಗಿ ಈಗಾಗಲೇ ವೈದ್ಯಕೀಯ ಪ್ರಮಾಣ ಪತ್ರ ಪಡೆದಿದ್ದು, ಹಾಲಿ ಪಡೆದಿರುವ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ರೂ. 1000.00 ಮಾಸಾಶನ ನೀಡಲು ತೀರ್ಮಾನಿಸಲಾಗಿದೆ.

ಹಾಲಿ ಯೋಜನೆಯಡಿ ಮಾಶಾಸನವನ್ನು ಪಡೆಯುತ್ತಿರುವ ಫಲಾನುಭವಿಗಳು ಶೇಕಡಾ 75% ರಷ್ಟು ಹಾಗೂ ಅದಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿದ್ದಕ್ಕಾಗಿ ಹೊಸದಾಗಿ ಕೋರಿಕೆ ಸಲ್ಲಿಸಿದಲ್ಲಿ ಅಂತಹ ಫಲಾನುಭವಿಗಳು ಹಾಗೂ ಹೊಸ ಅಭ್ಯರ್ಥಿಕರು ವೈದ್ಯಕೀಯ ಮಂಡಳಿಯಿಂದ ಧೃಡೀಕರಣ ಪತ್ರವನ್ನು ಪಡೆದ ನಂತರ ರೂ. 1000.00 ಗಳ ಮಾಸಾಶನಕ್ಕೆ ಅರ್ಹರಾಗುತ್ತಾರೆಂದು ಸಹಾ ತೀರ್ಮಾನಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಶೇಕಡಾ 75% ರಷ್ಟು ಹಾಗೂ ಅದಕ್ಕಿಂತ ಹೆಚ್ಚು ಅಂಗವಿಕಲತೆಯುಳ್ಳ ಅಂಗವಿಕಲರ ಬವಣೆಯನ್ನು ಸರ್ಕಾರವು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 3 ಪಿಹೆಚ್‌ಪಿ 2008, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2008.**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರಾಜ್ಯದಲ್ಲಿನ ಶೇಕಡಾ 75% ರಷ್ಟು ಹಾಗೂ ಅದಕ್ಕಿಂತ ಹೆಚ್ಚು ಅಂಗವಿಕಲತೆಯುಳ್ಳ ವ್ಯಕ್ತಿಗಳಿಗೆ ಮಾತ್ರ ಆರ್ಥಿಕ ನೆರವು ನೀಡಲು ಹಾಲಿ ನೀಡುತ್ತಿರುವ ಮಾಸಾಶನವನ್ನು ರೂ. 400.00

ರಿಂದ ರೂ. 1000.00 (ಒಂದು ಸಾವಿರ ರೂ.ಗಳು ಮಾತ್ರ) ಗಳಿಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದ ವರೆಗೆ ಹೆಚ್ಚಿಸಿ ಆದೇಶಿಸಲಾಗಿದೆ.

ಈಗಾಗಲೇ ಯೋಜನೆಯಡಿ ಶೇಕಡಾ 75% ರಷ್ಟು ಹಾಗೂ ಅದಕ್ಕಿಂತ ಹೆಚ್ಚು ಅಂಗವೈಕಲತೆಯುಳ್ಳ ವ್ಯಕ್ತಿಗಳು ವೈದ್ಯಕೀಯ ಪ್ರಮಾಣ ಪತ್ರ ಪಡೆದಿದ್ದರೆ, ಹಾಲಿ ಪಡೆದಿರುವ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಈ ಆದೇಶದನ್ವಯ ರೂ. 1000.00 ಮಾಸಾಶನವನ್ನು ನೀಡತಕ್ಕದ್ದು.

ಹಾಲಿ ಯೋಜನೆಯಡಿ ಇರುವ ಫಲಾನುಭವಿಗಳು ಹಾಗೂ ಹೊಸ ಅಭ್ಯರ್ಥಕರು ಶೇಕಡಾ 75% ರಷ್ಟು ಹಾಗೂ ಅದಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿದ್ದಕ್ಕಾಗಿ ಕೋರಿಕೆ ಸಲ್ಲಿಸಿದ್ದಲ್ಲಿ ಅಂತಹ ಫಲಾನುಭವಿಗಳು ಈಗಾಗಲೇ ರಚಿಸಲಾಗಿರುವ ವೈದ್ಯಕೀಯ ಮಂಡಳಿಯಿಂದ ಧೃಡೀಕರಣ ಪತ್ರವನ್ನು ಪಡೆದು ರೂ. 1000.00 ಮಾಸಾಶನ ಪಡೆಯಲು ಅರ್ಹರಾಗಿರುತ್ತಾರೆ.

ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2235–02–101–0–20ರ ಅಂಗವಿಕಲರ ವೇತನದ ಅಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ಭರಿಸತಕ್ಕದ್ದು. ಈಗಾಗಲೇ ಅಂಗವಿಕಲ ವೇತನ ನೀಡುವ ಬಗ್ಗೆ ಚಾಲ್ತಿಯಲ್ಲಿರುವ ಎಲ್ಲಾ ಷರತ್ತು ಮತ್ತು ನಿಬಂಧನೆಗಳು ಅನ್ವಯವಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1304

**ಡಿ. ತಂಗರಾಜ್**
ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ

**ವಿಷಯ :** ಶ್ರೀ ಯು.ಜಿ. ನಾಯಕ್, ಹಿಂದಿನ ತಹಶೀಲ್ದಾರ್, ಭಟ್ಕಳ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು. ಶಿವಮೊಗ್ಗ ಜಿಲ್ಲೆ ಇವರ ಪ್ರಸ್ತಾವನೆ ಪತ್ರ ಸಂ: ಸಿಬ್ಬಂದಿ(3):ವಿವ: 24/2005–06, ದಿನಾಂಕ 29–10–2005, 12–11–2007.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂ: 29–5–2006.
3. ಶ್ರೀ ಯು.ಜಿ. ನಾಯಕ್ ಇವರ ಲಿಖಿತ ಸಮಜಾಯಿಷಿ ದಿ: 14–8–2006.

**ಪ್ರಸ್ತಾವನೆ :**

ಶ್ರೀ ಯು.ಜಿ. ನಾಯಕ್, ಇವರ ಹಿಂದೆ ಉಪತಹಶೀಲ್ದಾರ್, ನಾಡಕಛೇರಿ, ಕೋಣಂದೂರು (ಪ್ರಸ್ತುತ ನಿವೃತ್ತ ತಹಶೀಲ್ದಾರ್) ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ತೀರ್ಥಹಳ್ಳಿ ತಾಲ್ಲೂಕಿನ ನೊಣಬೂರು ಗ್ರಾಮದ ಸ.ನಂ. 162ರ ಜಮೀನಿನ ಖಾತೆದಾರರ ಹೆಸರು ಮತ್ತು ಅಧಿಬೋಗದಾರಿಕೆ ಹಕ್ಕು ಪತ್ರ ಇತ್ಯಾದಿ ದಾಖಲೆಗಳನ್ನು ಪರಿಶೀಲಿಸದೇ, ಗ್ರಾಮಲೆಕ್ಕಾಧಿಕಾರಿಗಳು ನೀಡಿದ ವರದಿಯನ್ನು ಮಾತ್ರ ಪರಿಶೀಲಿಸಿ, ನೊಣಬೂರು ಸರ್ವೆ ನಂ: 162ರಲ್ಲಿ 1–06 ಎಕರೆ ತರಿ ಜಮೀನನ್ನು ಅಧಿಬೋಗದಾರಿಕೆ ಹಕ್ಕು ಮಂಜೂರಾತಿ ಪೂರ್ವದಲ್ಲಿಯೇ ಶ್ರೀ ಹರನಾಥ್‌ಭಟ್ ಬಿನ್ ಅನಂತ ಪದ್ಮನಾಭ ಭಟ್ ಇವರ ಹೆಸರಿಗೆ ಖಾತೆ, ಪಹಣಿ ಬದಲಾವಣೆ ಮಾಡಿ ಜುಬಾನಿ ಹಿಸ್ಸೆ ಪತ್ರದ ಮೇರೆ ಎಂ.ಆರ್.9:94–95, ದಿನಾಂಕ 10–4–95 ರಂತೆ ಅಕ್ರಮವಾಗಿ ಮ್ಯೂಟೇಷನ್ ಅನ್ನು ದೃಢೀಕರಿಸಿ, ಕಾನೂನನ್ನು ಉಲ್ಲಂಘನೆ ಮಾಡಿ, ಕರ್ತವ್ಯ ನಿರ್ಲಕ್ಷ ಮತ್ತು ಬೇಜವಾಬ್ದಾರಿಯಿಂದ ವರ್ತಿಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) 1966ರ ನಿಯಮಾವಳಿಗಳನ್ನು ಉಲ್ಲಂಘಿಸಿರುವ ಆರೋಪದ ಮೇರೆಗೆ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ. (1) ದಿನಾಂಕ 29–10–2005 ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಜಿಲ್ಲಾಧಿಕಾರಿಗಳ ಪ್ರಸ್ತಾವನೆ ಅನ್ವಯ, ಸರ್ಕಾರವು ಶ್ರೀ ಯು.ಜಿ. ನಾಯಕ್, ತಹಶೀಲ್ದಾರ್, ಇವರಿಗೆ ದೋಷಾರೋಪಣಾ ಪಟ್ಟಿ (ಅನುಬಂಧ 1 ರಿಂದ 4 ವರೆಗೆ) ಸಿಸಿಎ ನಿಯಮಾವಳಿ ಅನ್ವಯ, ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ 20–5–2006 ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಯು.ಜಿ. ನಾಯಕ್ ಮೇಲೆ ಓದಲಾದ ಕ್ರ.ಸಂ. ದಿನಾಂಕ 14–8–2006ರಲ್ಲಿ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ, ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆದು ನಿಯಮಾನುಸಾರ ಮ್ಯೂಟೇಷನ್ ಮಂಜೂರು ಮಾಡಲಾಗಿದೆ ಎಂದು ತಿಳಿಸಿ, ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಸದರಿಯವರ ಲಿಖಿತ ಸಮಜಾಯಿಷಿಯನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖೆ ವಿಚಾರಣೆಯನ್ನು ಜರುಗಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 61 ಎಡಿಇ 2005, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಹಾಗೂ 214 (2)(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಯು.ಜಿ. ನಾಯಕ್, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಮಾಡಲಾಗಿರುವ ಆರೋಪದ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎಸ್.ಜಿ. ಪಲ್ಲದೇವ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವೇದಿಕೆ, ಗದಗ್, ಗದಗ್ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಶಿವಮೊಗ್ಗ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007, ದಿ: 11–4–2008 ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಾಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1226

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

## COMMERCE AND INDUSTRIES SECRETARIAT

**Subject**: Project proposal of M/s Star Panel Boards Ltd., to establish a wood based industry for manufacture of "Particle Boards, High Pressure Laminates, Pre-Lamination of Particle Boards/MDF and Furniture & Components" at Malur Industrial Area, 4th Phase, Kolar District - Approval for - Orders reg.

**Read:**
1. Proceedings of the 15th State High Level Clearance Committee [SHLCC] meeting held on 21.8.2008.
2. Official Memorandum No. A5(4).CEC.CR-25/07-08 dated 18-10-2008 of Principal Chief Conservator of Forest, Bangalore.

**Preamble:**

M/s Star Panel Boards Ltd., a private limited company, has proposed to establish a wood based industry for manufacture of "Particle Boards, High Pressure Laminates, Pre-Lamination of Particle Boards/MDF and Furniture & Components" at Malur Industrial Area, 4th Phase, Kolar District with an investment of Rs.185.00 Crores. Upon development, this Project is expected to provide employment to 3625 persons.

In the proposal submitted before the 15th State High Level Clearance Committee meeting [SHLCC] held on 21.8.2008, the Company had requested for various Infrastructure facilities as well as incentives and concessions as envisaged in the New Industrial Policy 2006-11 from the Government. The State High Level Clearance Committee, after detailed discussion of the project proposal of the said Company, vide the proceedings read above, has recommended for approval of the project, to provide infrastructural facilities and to extend incentives & concessions as envisaged in the Industrial Policy of the State Government 2006-11.

Government has examined the recommendations made by the State High Level Clearance Committee in its 15th Meeting held on 21.8.2008 in all aspects. Hence the following order.

**GOVERNMENT ORDER NO: CI 317 SPI 2008, BANGALORE DATED: 21ST OCTOBER 2008**

In the circumstances explained above, Government is pleased to accord approval to M/s Star Panel Boards Ltd., to establish a wood based industry for manufacture of "Particle Boards, High Pressure Laminates, Pre-Lamination of Particle Boards/MDF and Furniture & Components" at Malur Industrial Area, 4th Phase, Kolar District with an investment of Rs.185.00 Crores & to provide employment to 3625 persons, with the following infrastructural facilities, incentives and concessions:-

**INFRASTRUCTRE FACILITIES:**

**LAND:**

20 acres of additional land to be allotted as SUC by KIADB at 4th Phase of Malur Industrial Area, Kolar District, in addition to 40 acres already allotted by KIADB as SUC.

**WATER:**

Required water to be supplied by KIADB. The company shall adopt rainwater harvesting and water recycling.

**POWER:**

5800 KVA to be serviced by BESCOM.

**INCENTIVES & CONCESSIONS:**

As per New Industrial Policy 2006-2011.

**ENVIRONMENT:**

KSPCB to issue CFE as per their norms. The company shall obtain environmental clearance from State. No civil works shall commence prior to obtaining ECC.

**EMPLOYMENT:**

Project proponents shall play a proactive role in enhancing the employability of the local job seekers, including the land losers. Further, the Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e Dr. Sarojini Mahishi report. A copy of human resources development plan shall be sent to the Commissioner for I.D. & Director of Industries and Commerce for monitoring.

**VENDOR DEVELOPMENT:**

Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**SOCIAL INFRASTRUCTURE DEVELOPMENT:**

The Company is advised to take up social infrastructure development projects in the vicinity of proposed location of the unit. A copy of such projects shall be sent to the Government.

**OTHERS:**

The promoter shall take all statutory and other necessary clearances and shall submit milestones / progress in implementation of the project regularly, which will be monitored by the Departments concerned.

The promoters have already obtained permission from Forest Department vide Official Memorandum No. A5(4).CEC.CR-25/07-08 dated 18-10-2008 as a **wood based industry** from Principal Chief Conservator of Forest, Bangalore.

This approval is valid for a period of two years from the date of issue.

By Order and in the name of the Governor of Karnataka,

P.R. 1462

**APARNA PAVATE**
Desk Officer (Technical Cell)
Commerce & Industries Department

**ಕಂದಾಯ ಸಚಿವಾಲಯ**

**ವಿಷಯ :** 2008–09ನೇ ಸಾಲಿನಲ್ಲಿ ಬಿದ್ದ ಭಾರಿ ಮಳೆಯಿಂದ ಆಗಿರುವ ಹಾನಿಗೆ ತುರ್ತು ಪರಿಹಾರ ನೀಡಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ :**

2008–09ನೇ ಆಗಸ್ಟ್ ತಿಂಗಳನಲ್ಲಿ ಬಿದ್ದ ಭಾರಿ ಮಳೆಯಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ನಗರ ವ್ಯಾಪ್ತಿಯಲ್ಲಿ ಪ್ರವಾಹ ಹಾನಿ ಸಂಭವಿಸಿರುತ್ತದೆ. ಸದರಿ ಹಾನಿಗೆ ತುರ್ತು ಪರಿಹಾರ ಕಾರ್ಯಕೈಗೊಳ್ಳಲು ಸರ್ಕಾರವು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಬೃಹತ್ ಬೆಂಗಳೂರು ಪಾಲಿಕೆಗೆ ಹಣ ಬಿಡುಗಡೆ ಮಾಡಲು ತೀಮಾನಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 145 ಟಿಎನ್‌ಆರ್ 2008 (ಪಿ1) ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ 2008ನೇ ಆಗಸ್ಟ್ ಮಾಹೆಯಲ್ಲಿ ಬಿದ್ದ ಭಾರಿ ಮಳೆಯಿಂದ ಆಗಿರುವ ಉಂಟಾದ ಹಾನಿಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಆಯುಕ್ತರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಬೆಂಗಳೂರು ಇವರಿಗೆ ಕೆಳಕಂಡಂತೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| | |
|---|---|
| ಲೆಕ್ಕಶೀರ್ಷಿಕೆ 2245–80–101–0–02–100 (ಯೋಜನೇತರ) | ರೂ. 633–00 ಲಕ್ಷ |
| ಲೆಕ್ಕಶೀರ್ಷಿಕೆ 2245–01–800–1–01–100 (ಯೋಜನೇತರ) | ರೂ. 330–00 ಲಕ್ಷ |
| ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೇತರ) | ರೂ. 37–00 ಲಕ್ಷ |
| **ಒಟ್ಟು** | **ರೂ. 1000–00 ಲಕ್ಷ** |

ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಕೇಂದ್ರ ಸರ್ಕಾರದ ಪತ್ರ ಸಂಖ್ಯೆ 32–34/2007 NDM-I ದಿನಾಂಕ 27–6–2007ರಲ್ಲಿ ಹೊರಡಿಸಿರುವ ಪ್ರಕೃತಿ ವಿಕೋಪ ಪರಿಹಾರ ಮಾರ್ಗಸೂಚಿಗಳ ಪ್ರಕಾರ ಮಾತ್ರ ವೆಚ್ಚ ಮಾಡತಕ್ಕದ್ದು.

ಮೇಲೆ ಬಿಡುಗಡೆ ಮಾಡಿರುವ ಮೊತ್ತವನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು ಪೇಯೀಸ್ ರಶೀದಿ ಬಿಲ್ಲು ತಯಾರಿಸಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಸರ್ಕಾರದ ಕಾರ್ಯದರ್ಶಿ ಕಂದಾಯ ಇಲಾಖೆ ಇವರಿಂದ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ಡ್ರಾ ಮಾಡಿಕೊಳ್ಳಲು ಆದೇಶಿಸಿದೆ. ಬಿಲ್ಲಿನಲ್ಲಿ ಸರಿಯಾದ ಲೆಕ್ಕ ಶೀರ್ಷಿಕೆಯನ್ನು ಸರಿಯಾಗಿ ನಮೂದಿಸುವುದು. ಹಣ ವೆಚ್ಚ ಮಾಡಿದ್ದಕ್ಕೆ ಉಪಯೋಗಿತ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ: 1115:ವೆಚ್ಚ–7/2008, ದಿನಾಂಕ 26–8–2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1305

**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

**ಶಿಕ್ಷಣ ಸಚಿವಾಲಯ**

**ವಿಷಯ:** ರಾಜ್ಯದಲ್ಲಿ ಹೊಸದಾಗಿ ಪ್ರಾರಂಭಿಸಲಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ನಿವೇಶನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು [ಪ್ರೌಢ ಶಿಕ್ಷಣ], ಆಯುಕ್ತರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರ ಪತ್ರಸಂಖ್ಯೆ: ಯೋ7 ಸಪ್ರದಕಾ ನಿವೇಶನ 34 /2007–08/ ದಿನಾಂಕ: 05–06–2008

**ಪ್ರಸ್ತಾವನೆ:**

(1) ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು [ಪ್ರೌಢಶಿಕ್ಷಣ], ಆಯುಕ್ತರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರು, ರಾಜ್ಯದಲ್ಲಿ ಹೊಸದಾಗಿ ಪ್ರಾರಂಭಿಸ ಲಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ನಿವೇಶನ ಮಂಜೂರು ಮಾಡುವ ಬಗ್ಗೆ ಇಲಾಖಾ ಸುಪರ್ದಿಗೆ ಒಳಪಡುವ ನಿವೇಶನಗಳನ್ನು ಕಾಲೇಜು ಶಿಕ್ಷಣ ಇಲಾಖೆಗೆ ವರ್ಗಾಯಿಸುವ ಬಗ್ಗೆ ಈ ಕೆಳಕಂಡಂತೆ ವಿವರ ನೀಡಿರುತ್ತಾರೆ.

| ಕ್ರ.ಸಂ | ನಿವೇಶನ ಲಭ್ಯವಿರುವ ಸ್ಥಳ | ಅಳತೆ | ವರ್ಗಾಯಿಸುವ ಸ್ಥಳ |
|---|---|---|---|
| 1. | ಪುಂಜಾಲಕಟ್ಟೆ ಸ.ಪ.ಪೂ. ಕಾಲೇಜು, [ಪ್ರೌ.ಶಾ. ವಿಭಾಗ], ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | 3.00 ಎಕರೆ | ಪುಂಜಾಲ ಕಟ್ಟೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, |
| 2. | ಹೊಳಲ್ಕೆರೆ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಚಿತ್ರದುರ್ಗ ಜಿಲ್ಲೆ | 1 ಎಕರೆ 11 ಗುಂಟೆ | ಹೊಳಲ್ಕೆರೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, |
| 3. | ಸಿದ್ಧಕಟ್ಟೆ ಸ.ಪ.ಪೂ. ಕಾಲೇಜು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | 2.00 ಎಕರೆ | ಸಿದ್ಧಕಟ್ಟೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, |
| 4. | ತ್ಯಾಮಗೊಂಡ್ಲು, ಸ.ಪ.ಪೂ. ಕಾಲೇಜು, ನೆಲಮಂಗಲ ತಾಲ್ಲೂಕು, ಬೆಂ.ಗ್ರಾಮಾಂತರ ಜಿಲ್ಲೆ. | 198 x 145 ಅಡಿ ನಿವೇಶನ | ತ್ಯಾಮಗೊಂಡ್ಲು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, |

ಸರ್ಕಾರಿ ಪದವಿ ಪೂರ್ವ ಕಾಲೇಜು ಮತ್ತು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ಸೇರಿರುವ ಜಮೀನನ್ನು ಕಾಲೇಜು ಶಿಕ್ಷಣ ಇಲಾಖೆಗೆ ಹಸ್ತಾಂತರಿಸಬಹುದೆಂದು ಅಭಿಪ್ರಾಯಿಸಿ, ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸು ತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ: 146 :ಯೋಸಕ 2008 ಬೆಂಗಳೂರು, ದಿನಾಕ: 09ನೇ ಜುಲೈ 2008**

**[ಇಡಿ:132 : ಸ್ವೀಮರ(ಯುನಿಕ್) 2008, ದಿನಾಂಕ 09–07–2008]**

(3) ರಾಜ್ಯದಲ್ಲಿ ಹೊಸದಾಗಿ ಪ್ರಾರಂಭಿಸಲಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ನಿವೇಶನ ಮಂಜೂರು ಮಾಡುವ ಬಗ್ಗೆ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸೇರಿದ ಈ ಕೆಳಕಂಡ ಜಮೀನನ್ನು ಅವುಗಳ ಮುಂದೆ ತೋರಿಸಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಕಟ್ಟಡ ನಿರ್ಮಿಸುವ ಸಲುವಾಗಿ ಕಾಲೇಜು ಶಿಕ್ಷಣ ಇಲಾಖೆಗೆ ಹಸ್ತಾಂತರಿಸಲು ನಿಯಮಾನು ಸಾರ ಕ್ರಮ ಕೈ ಗೊಳ್ಳಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

| ಕ್ರ.ಸಂ | ನಿವೇಶನ ಲಭ್ಯವಿರುವ ಸ್ಥಳ | ಅಳತೆ | ವರ್ಗಾಯಿಸುವ ಸ್ಥಳ |
|---|---|---|---|
| 1. | ಪುಂಜಾಲಕಟ್ಟೆ ಸ.ಪ.ಪೂ. ಕಾಲೇಜು, [ಪ್ರೌ.ಶಾ. ವಿಭಾಗ], ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | 3.00 ಎಕರೆ | ಪುಂಜಾಲ ಕಟ್ಟೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, |
| 2. | ಹೊಳಲ್ಕೆರೆ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಚಿತ್ರದುರ್ಗ ಜಿಲ್ಲೆ | 1 ಎಕರೆ 11 ಗುಂಟೆ | ಹೊಳಲ್ಕೆರೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, |
| 3. | ಸಿದ್ಧಕಟ್ಟೆ ಸ.ಪ.ಪೂ. ಕಾಲೇಜು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | 2.00 ಎಕರೆ | ಸಿದ್ಧಕಟ್ಟೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, |

| ಕ್ರ.ಸಂ | ನಿವೇಶನ ಲಭ್ಯವಿರುವ ಸ್ಥಳ | ಅಳತೆ | ವರ್ಗಾಯಿಸುವ ಸ್ಥಳ |
|---|---|---|---|
| 4. | ತ್ಯಾಮಗೊಂಡ್ಲು, ಸ.ಪ.ಪೂ. ಕಾಲೇಜು, ನೆಲಮಂಗಲ ತಾಲ್ಲೂಕು, ಬೆಂ.ಗ್ರಾಮಾಂತರ ಜಿಲ್ಲೆ. | 198 x 145 ಅಡಿ ನಿವೇಶನ | ತ್ಯಾಮಗೊಂಡ್ಲು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1083

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ [ಯೋಜನೆ]

**ವಿಷಯ:** ಮಂಡ್ಯ ಜಿಲ್ಲೆ ಕೆ.ಆರ್.ಪೇಟೆ ಯಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪನೆ ಬಗ್ಗೆ – ವಿದ್ಯಾರ್ಥಿನಿಯರ ವಿದ್ಯಾರ್ಥಿನಿಲಯ ಖಾಸಗಿ ಕಟ್ಟಡದ ಬಾಡಿಗೆಗೆ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಇಡಿ: 60: ಟಿ.ಇ.ಸಿ 2007(2) ದಿನಾಂಕ: 25–05–2007
2. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಟಿಇ–34–ಬಿ.ಎಲ್.ಡಿ 2007/1311/ದಿನಾಂಕ 19/21–07–2008

**ಪ್ರಸ್ತಾವನೆ:**

(1) ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆ ಯಲ್ಲಿ 2007–08ನೇ ಶೈಕ್ಷಣಿಕ ಸಾಲಿನಿಂದ ಹೊಸ ಇಂಜಿನಿಯರಿಂಗ್ ಕಾಲೇಜನ್ನು ಮಂಜೂರು ಮಾಡಲಾಗಿದೆ.

(2) ಮೇಲೆ ಓದಲಾದ (2) ರ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆಯಲ್ಲಿ 2007–08ನೇ ಶೈಕ್ಷಣಿಕ ಸಾಲಿನಿಂದ ಹೊಸ ಸರ್ಕಾರಿ ಇಂಜಿನಿಯರಿಂಗ್ ಕಾಲೇಜನ್ನು ಸ್ಥಾಪನೆ ಮಾಡಲು ಆದೇಶ ನೀಡಿದ್ದು, ಅದರಂತೆ ಇಂಜಿನಿಯರಿಂಗ್ ಕಾಲೇಜನ್ನು ಪ್ರಾರಂಭಿಸಲಾಗಿದ್ದು, ಸದರಿ ಕಾಲೇಜಿಗೆ ವಿದ್ಯಾರ್ಥಿಗಳು ಪ್ರವೇಶವನ್ನು ಪಡೆದಿರುತ್ತಾರೆ. ಸದರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿನಿಗಳ ತಂಗುವಿಕೆಗಾಗಿ ಶ್ರೀ. ಜಯರಾಮು, ಬಿನ್ ಮರಿಚಿಕ್ಕೇಗೌಡ ಕೆ.ಆರ್.ಪೇಟೆ ಇವರ ಖಾಸಗಿ ಕಟ್ಟಡವನ್ನು ಗುರುತಿಸಿ ಲೋಕೋಪಯೋಗಿ ಇಲಾಖಾ ವತಿಯಿಂದ ನಿಗಧಿಪಡಿಸಿರುವ ಕಟ್ಟಡದ ಬಾಡಿಗೆ ಮಾಸಿಕ 25,950/–ರಂತೆ ಪಾವತಿ ಮಾಡುವ ಷರತ್ತಿಗೊಳಪಟ್ಟು ಮೇಲ್ಕಂಡ ಕಟ್ಟಡವನ್ನು ಬಾಡಿಗೆಗೆ ಪಡೆಯಲು ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ. ಸದರಿ ಬಾಡಿಗೆಯನ್ನು 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ 2203–00–112–0–02–ಯೋಜನೆ ಅಡಿ ಒದಗಿಸಿರುವ ಅನುದಾನದ ಮಿತಿಯೊಳಗೆ ಭರಿಸುವುದಾಗಿ ತಿಳಿಸಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 205 :ಯೋಸಕ 2008 ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2008**

**[ಇಡಿ: 142 : ಸ್ವೀಮರ(ಯುನಿಕ್) 2008, ದಿನಾಂಕ: 28–08–2008]**

(4) ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆಯಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿರುವ ಹೆಣ್ಣುಮಕ್ಕಳಿಗೆ ವಿದ್ಯಾರ್ಥಿನಿಲಯವನ್ನು ಒದಗಿಸುವ ಸಲುವಾಗಿ ಶ್ರೀ. ಜಯರಾಮು, ಬಿನ್ ಮರಿಚಿಕ್ಕೇಗೌಡ ಕೆ.ಆರ್.ಪೇಟೆ ಇವರ ಖಾಸಗಿ ಕಟ್ಟಡವನ್ನು ಮಾಸಿಕ 25,950/–ರೂಗಳಂತೆ [ಇಪ್ಪತ್ತೈದು ಸಾವಿರದ ಒಂಭೈನೂರಾ ಐವತ್ತು ರೂಪಾಯಿ ಗಳು ಮಾತ್ರ] ಬಾಡಿಗೆ ಆಧಾರದ ಮೇಲೆ ಪಡೆಯಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತನ್ನು ವಿಧಿಸಿ ಅನುಮತಿ ನೀಡಿದೆ.

(5) ಸದರಿ ಮೊತ್ತವನ್ನು 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ 2203–00–112–0–02 [ಯೋಜನೆ]ಅಡಿ ಒದಗಿಸಿರುವ ಅನುದಾನದ ಮಿತಿಯೊಳಗೆ ಭರಿಸತಕ್ಕದ್ದು.

**ಷರತ್ತುಗಳು:**

- ಕಾಲೇಜಿನ ವಿದ್ಯಾರ್ಥಿನಿಯರಿಗೆ ಯಾವುದೇ ತೊಂದರೆಯಾಗದಂತೆ ಎಚ್ಚರಿಕೆ ವಹಿಸ ತಕ್ಕದ್ದು.
- 01–03–2008ರಿಂದ ಅನ್ವಯವಾಗುವಂತೆ ಲೋಕೋಪಯೋಗಿ ಇಲಾಖೆಯು ನಿಗದಿಪಡಿಸುವ ಹೊಸದರಗಳಲ್ಲಿ ಬಾಡಿಗೆ ನಿಗದಿಪಡಿಸತಕ್ಕದ್ದು.

θ ಸದರಿ ಬಾಡಿಗೆಯನ್ನು ಡಿ.ಸಿ.ಬಿಲ್ಲಿನ ಮೂಲಕ ಡ್ರಾ ಮಾಡಿ ಕಟ್ಟಡದ ಮಾಲಿಕ ರಿಗೆ ಪಾವತಿಸತಕ್ಕದ್ದು.

θ ಆದೇಶ ನೀಡಿದ ನಂತರ ಆಯಾ ತಿಂಗಳ ಬಾಡಿಗೆಯನ್ನು ಡಿ.ಸಿ. ಬಿಲ್ಲಿನ ಮೂಲಕ ಡ್ರಾ ಮಾಡಿ ವಿದ್ಯಾರ್ಥಿನಿಲಯಕ್ಕಾಗಿ ಸ್ವಂತ ಕಟ್ಟಡ ನಿರ್ಮಾಣ ಮಾಡುವವರೆಗೆ ಇಲ್ಲವೇ ಸದರಿ ಕಟ್ಟಡಕ್ಕಿಂತ ಕಡಿಮೆ ಬಾಡಿಗೆಯಲ್ಲಿ ಬೇರೆ ಸೂಕ್ತವಾದ ಕಟ್ಟಡ ದೊರೆತು ಸದರಿ ಕಟ್ಟಡವನ್ನು ತೆರವು ಮಾಡಿದ ದಿನದವರೆಗೆ ಮಾಲೀಕರಿಗೆ ಬಾಡಿಗೆ ಪಾವತಿ ಮಾಡತಕ್ಕದ್ದು.

(6) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಶಿಇ 948 ಐಎಫ್ (ಬಿಎ)2008, ದಿನಾಂಕ: 19–08–2008ರಲ್ಲಿ ನೀಡಿರುವ ಸಹಮತಿ ಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1308

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ [ಯೋಜನೆ]
ಶಿಕ್ಷಣ ಇಲಾಖೆ

**ವಿಷಯ:** 2008–09ನೇ ಸಾಲಿನ ಪದವಿ ಪೂರ್ವ ಶಿಕ್ಷಣ ಇಲಾಖೆ ಯಲ್ಲಿ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಮುಂದುವೆಸುವ ಕುರಿತು.

**ಓದಲಾಗಿದೆ:** 1. ದಿನಾಂಕ: 29–06–2007, ಸಂಖ್ಯೆ: ಇಡಿ 190 ಯೋಯೋಕ 2007ರ ಸರ್ಕಾರಿ ಆದೇಶ
2. ದಿನಾಂಕ:09–04–2008,ಸಂಖ್ಯೆ: ಪಪೂಶಿಇ 01 ಸಿಬ್ಬಂದಿ–2 ಇತರೆ ಸಿಸಿ 2008 ರ ಪದವಿ ಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರು ರವರ ಪತ್ರ

**ಪ್ರಸ್ತಾವನೆ:**

(1) ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು 2007–08ನೇ ಸಾಲಿನ ದಿನಾಂಕ: 01–04–2007 ರಿಂದ 31–03–2008ರ ವರೆಗೆ ತಾತ್ಕಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿತ್ತು.

(2) ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರು ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು 2008–09ನೇ ಸಾಲಿನ, ದಿನಾಂಕ: 01–04–2008 ರಿಂದ 31–03–2009 ವರೆಗೆ ತಾತ್ಕಲಿಕವಾಗಿ ಮುಂದುವರೆ ಸಲು ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

(3) ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು 2008–09ನೇ ಸಾಲಿನಲ್ಲಿಯೂ ಮುಂದುವರೆಸುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಇಡಿ 100 ಯೋಯೋಕ 2008, ಬೆಂಗಳೂರು, ದಿ. 16ನೇ ಜುಲೈ 2008**

**[ಇಡಿ: 133 :ಸ್ವೀಮರ(ಯುನಿಕ್), 2008, ದಿನಾಂಕ: 16–07–2008]**

(4) ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿ ರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ 2008–09ನೇ ಸಾಲಿನ, ದಿನಾಂಕ:01–04–2008 ರಿಂದ 31–03–2009ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಿದೆ.

(5) ಇದಕ್ಕೆ ತಗಲುವ ವೆಚ್ಚವನ್ನು ಸಂಬಂಧಿಸಿದ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

(6) ಈ ಆದೇಶವನ್ನು ದಿನಾಂಕ: 10–07–1996, ಸಂಖ್ಯೆ ಎಫ್.ಡಿ: 1:ಟಿಎಫ್.ಪಿ 1996ರ ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರದನ್ವಯ ಹಾಗೂ ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ: 04–07–2008, ಸಂಖ್ಯೆ: ಶಿ.ಇ: 723 : ಐ.ಎಫ್(ಬಿಎ) 2008ರ ಅನಧಿಕೃತ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

**ಸರ್ಕಾರದ ಆದೇಶ ಸಂಖ್ಯೆ: ಇಡಿ 100 ಯೋಯೋಕ 2008: ಬೆಂಗಳೂರು, ದಿನಾಂಕ 16-07-2008**
**[ಇಡಿ: 133 :ಸ್ವೀಮರ(ಯುನಿಕ್), 2008, ದಿನಾಂಕ:16-07-2008] ಕ್ಕೆ ಅನುಬಂಧ**

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ | ಹುದ್ದೆಗಳ ಸೃಜನೆಯ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|
| 1. | ಪ್ರಾಚಾರ್ಯರು | 109 | ಇಡಿ:142:ಟಿಪಿಯು 72:ದಿ.6.2.1972 |
| 2. | ಉಪನ್ಯಾಸಕರು | 1110 | ಇಡಿ:142:ಟಿಪಿಯು 72:ದಿ.6.2.1972 |
| 3. | ಗ್ರಂಥಪಾಲಕರು | 89 | ಇಡಿ:142:ಟಿಪಿಯು 72:ದಿ.6.2.1972 |
| 4. | ಪ್ರಥಮ ದರ್ಜೆ ಸಹಾಯಕರು | 89 | ಇಡಿ:142:ಟಿಪಿಯು 72:ದಿ.6.2.1972 |
| 5. | ದ್ವಿತೀಯ ದರ್ಜೆ ಸಹಾಯಕರು | 109 | ಇಡಿ:142:ಟಿಪಿಯು 72:ದಿ.6.2.1972 |
| 6. | ದ್ವಿತೀಯ ದರ್ಜೆ ಸಹಿತ ಸಹಾಯಕರು | 109 | ಇಡಿ:142:ಟಿಪಿಯು 72:ದಿ.6.2.1972 |
| 7. | ಪರಿಚಾರಕರು | 109 | ಇಡಿ:142:ಟಿಪಿಯು 72:ದಿ.6.2.1972 |
| 8. | ಸೇವಕ | 109 | ಇಡಿ:142:ಟಿಪಿಯು 72:ದಿ.6.2.1972 |
| 9. | ಪ್ರಾಚಾರ್ಯರು | 20 | ಇಡಿ:152:ಟಿಪಿಯು 73:ದಿ.17.8.1973 |
| 10. | ಉಪನ್ಯಾಸಕರು | 200 | ಇಡಿ:152:ಟಿಪಿಯು 73:ದಿ.17.8.1973ಟ |
| 11. | ದ್ವಿತೀಯ ದರ್ಜೆ ಸಹಾಯಕರು | 20 | ಇಡಿ:152:ಟಿಪಿಯು 73:ದಿ.17.8.1973 |
| 12. | ದ್ವಿತೀಯ ದರ್ಜೆ ಸಹಿತ ಬೆರಳಚ್ಚುಗಾರರು | 20 | ಇಡಿ:152:ಟಿಪಿಯು 73:ದಿ.17.8.1973 |
| 13. | ಪರಿಚಾರಕ | 20 | ಇಡಿ:152:ಟಿಪಿಯು 73:ದಿ.17.8.1973 |
| 14. | ಸೇವಕ | 20 | ಇಡಿ:152:ಟಿಪಿಯು 73:ದಿ.17.8.1973 |
| 15. | ಪ್ರಾಚಾರ್ಯರು | 10 | ಇಡಿ:250:ಟಿಪಿಯು 73:ದಿ.3.1.1975 |
| 16. | ಉಪನ್ಯಾಸಕರು | 80 | ಇಡಿ:250:ಟಿಪಿಯು 73:ದಿ.3.1.1975 |
| 17. | ದ್ವಿತೀಯ ದರ್ಜೆ ಸಹಾಯಕರು | 10 | ಇಡಿ:250:ಟಿಪಿಯು 73:ದಿ.3.1.1975 |
| 18. | ದ್ವಿತೀಯ ದರ್ಜೆ ಸಹಿತ ಬೆರಳಚ್ಚುಗಾರರು | 10 | ಇಡಿ:250:ಟಿಪಿಯು 73:ದಿ.3.1.1975 |
| 19. | ಪರಿಚಾರಕ | 2 | ಇಡಿ:250:ಟಿಪಿಯು 73:ದಿ.3.1.1975 |
| 20 | ಸೇವಕ | 10 | ಇಡಿ:250:ಟಿಪಿಯು 73:ದಿ.3.1.1975 |
| 21 | ಪ್ರಾಚಾರ್ಯರು | 1 | ಇಡಿ:51:ಟಿಪಿಯು 76:ದಿ.30.6.1976 |
| 22. | ಉಪನ್ಯಾಸಕರು | 12 | ಇಡಿ:51:ಟಿಪಿಯು 76:ದಿ.30.6.1976 |
| 23. | ಪ್ರಾಚಾರ್ಯರು | 3 | ಇಡಿ:76:ಎಸ್‌ಓಹೆಚ್ 77 ದಿ.24.1.1977 |
| 24. | ಉಪನ್ಯಾಸಕರು | 18 | ಇಡಿ:76:ಎಸ್‌ಓಹೆಚ್ 77 ದಿ.24.1.1977 |
| 25. | ದ್ವಿತೀಯ ದರ್ಜೆ ಸಹಾಯಕರು | 3 | ಇಡಿ:76:ಎಸ್‌ಓಹೆಚ್ 77 ದಿ.24.1.1977 |
| 26. | ಪ್ರಾಚಾರ್ಯರು | 2 | ಇಡಿ:137:ಎಲ್‌ಎಂಎಸ್ 76:ದಿ.24.1.1977 |
| 27. | ಉಪನ್ಯಾಸಕರು | 20 | ಇಡಿ:137:ಎಲ್‌ಎಂಎಸ್ 76:ದಿ.24.1.1977 |
| 28. | ದ್ವಿತೀಯ ದರ್ಜೆ ಸಹಾಯಕರು | 2 | ಇಡಿ:137:ಎಲ್‌ಎಂಎಸ್ 76:ದಿ.24.1.1977 |
| 29. | ದ್ವಿತೀಯ ದರ್ಜೆ ಸಹಿತ ಬೆರಳಚ್ಚುಗಾರರು | 2 | ಇಡಿ:137:ಎಲ್‌ಎಂಎಸ್ 76:ದಿ.24.1.1977 |
| 30. | ಪರಿಚಾರಕ | 2 | ಇಡಿ:137:ಎಲ್‌ಎಂಎಸ್ 76:ದಿ.24.1.1977 |
| 31. | ಸೇವಕ | 2 | ಇಡಿ:137:ಎಲ್‌ಎಂಎಸ್ 76:ದಿ.24.1.1977 |
| 32 | ಪ್ರಾಚಾರ್ಯರು | 1 | ಇಡಿ:7:ಎಲ್‌ಎಂಎಸ್76: ದಿ.28.6.1976 |
| 33 | ಉಪನ್ಯಾಸಕರು | 7 | ಇಡಿ:7:ಎಲ್‌ಎಂಎಸ್76: ದಿ.28.6.1976 |
| 34 | ದ್ವಿತೀಯ ದರ್ಜೆ ಸಹಾಯಕರು | 1 | ಇಡಿ:7:ಎಲ್‌ಎಂಎಸ್76: ದಿ.28.6.1976 |
| 35 | ದ್ವಿತೀಯ ದರ್ಜೆ ಸಹಿತ ಬೆರಳಚ್ಚುಗಾರರು | 1 | ಇಡಿ:7:ಎಲ್‌ಎಂಎಸ್76: ದಿ.28.6.1976 |
| 36 | ಪ್ರಾಚಾರ್ಯರು | 1 | ಇಡಿ:39:ಎಸ್‌ಇಎಸ್ 79:ದಿ.15.8.1970 |
| 37 | ಉಪನ್ಯಾಸಕರು | 7 | ಇಡಿ:39:ಎಸ್‌ಇಎಸ್ 79:ದಿ.15.8.1970 |

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ | ಹುದ್ದೆಗಳ ಸೃಜನೆಯ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|
| 38 | ಪ್ರಥಮ ದರ್ಜೆ ಸಹಾಯಕರು | 1 | ಇಡಿ:39:ಎಸ್ಇಎಸ್ 79:ದಿ.15.8.1970 |
| 39 | ದ್ವಿತೀಯ ದರ್ಜೆ ಸಹಾಯಕರು | 1 | ಇಡಿ:39:ಎಸ್ಇಎಸ್ 79:ದಿ.15.8.1970 |
| 40 | ಸೇವಕ | 1 | ಇಡಿ:39:ಎಸ್ಇಎಸ್ 79:ದಿ.15.8.1970 |
| 41 | ಪ್ರಾಚಾರ್ಯರು | 7 | ಇಡಿ:108:ಎಸ್ಇಎಸ್ 79:ದಿ.22.8.1979 |
| 42 | ಉಪನ್ಯಾಸಕರು | 46 | ಇಡಿ:108:ಎಸ್ಇಎಸ್ 79:ದಿ.22.8.1979 |
| 43 | ಗ್ರಂಥಪಾಲಕರು | 7 | ಇಡಿ:108:ಎಸ್ಇಎಸ್ 79:ದಿ.22.8.1979 |
| 44 | ಪ್ರಥಮ ದರ್ಜೆ ಸಹಾಯಕರು | 7 | ಇಡಿ:108:ಎಸ್ಇಎಸ್ 79:ದಿ.22.8.1979 |
| 45 | ಪರಿಚಾರಕ | 3 | ಇಡಿ:108:ಎಸ್ಇಎಸ್ 79:ದಿ.22.8.1979 |
| 46 | ಪ್ರಾಚಾರ್ಯರು | 1 | ಇಡಿ:36:ಎಸ್ಇಹೆಚ್ 79:ದಿ.30.8.1979 |
| 47 | ಉಪನ್ಯಾಸಕರು | 6 | ಇಡಿ:36:ಎಸ್ಇಹೆಚ್ 79:ದಿ.30.8.1979 |
| 48 | ಗ್ರಂಥಪಾಲಕರು | 1 | ಇಡಿ:36:ಎಸ್ಇಹೆಚ್ 79:ದಿ.30.8.1979 |
| 49 | ಪ್ರಥಮ ದರ್ಜೆ ಸಹಾಯಕರು | 1 | ಇಡಿ:36:ಎಸ್ಇಹೆಚ್ 79:ದಿ.30.8.1979 |
| 50 | ಪ್ರಾಚಾರ್ಯರು | 1 | ಇಡಿ:149:ಹೆಚ್ಇಹೆಚ್ 79:ದಿ.4.10.1979 |
| 51 | ಉಪನ್ಯಾಸಕರು | 6 | ಇಡಿ:149:ಹೆಚ್ಇಹೆಚ್ 79:ದಿ.4.10.1979 |
| 52 | ಗ್ರಂಥಪಾಲಕರು | 1 | ಇಡಿ:149:ಹೆಚ್ಇಹೆಚ್ 79:ದಿ.4.10.1979 |
| 53 | ಪ್ರಥಮ ದರ್ಜೆ ಸಹಾಯಕರು | 1 | ಇಡಿ:149:ಹೆಚ್ಇಹೆಚ್ 79:ದಿ.4.10.1979 |
| 54 | ಪ್ರಾಚಾರ್ಯರು | 7 | ಇಡಿ:59:ಎಂಹೆಚ್ಎಸ್ 80:ದಿ.1.7.1980 |
| 55 | ಉಪನ್ಯಾಸಕರು | 48 | ಇಡಿ:59:ಎಂಹೆಚ್ಎಸ್ 80:ದಿ.1.7.1980 |
| 56 | ದ್ವಿತೀಯ ದರ್ಜೆ ಸಹಾಯಕರು | 7 | ಇಡಿ:59:ಎಂಹೆಚ್ಎಸ್ 80:ದಿ.1.7.1980 |
| 57 | ದ್ವಿತೀಯ ದರ್ಜೆ ಸಹಿತ ಬೆರಳಚ್ಚುಗಾರರು | 7 | ಇಡಿ:59:ಎಂಹೆಚ್ಎಸ್ 80:ದಿ.1.7.1980 |
| 58 | ಸೇವಕ | 7 | ಇಡಿ:59:ಎಂಹೆಚ್ಎಸ್ 80:ದಿ.1.7.1980 |
| 59 | ಪ್ರಾಚಾರ್ಯರು | 2 | ಇಡಿ:59:ಎಂಹೆಚ್ಎಸ್ 80:ದಿ.1.7.1980 |
| 60 | ಉಪನ್ಯಾಸಕರು | 16 | ಇಡಿ:69:ಎಂಹೆಚ್ಎಸ್ 80:ದಿ.1.7.11.1980 |
| 61 | ದ್ವಿತೀಯ ದರ್ಜೆ ಸಹಾಯಕರು | 2 | ಇಡಿ:69:ಎಂಹೆಚ್ಎಸ್ 80:ದಿ.1.7.11.1980 |
| 62 | ದ್ವಿತೀಯ ದರ್ಜೆ ಸಹಿತ ಬೆರಳಚ್ಚುಗಾರರು | 2 | ಇಡಿ:69:ಎಂಹೆಚ್ಎಸ್ 80:ದಿ.1.7.11.1980 |
| 63 | ಸೇವಕ | 2 | ಇಡಿ:69:ಎಂಹೆಚ್ಎಸ್ 80:ದಿ.1.7.11.1980 |
| 64 | ಪ್ರಾಚಾರ್ಯರು | 30 | ಇಡಿ:82:ಎಂಯುಎಸ್ 80:ದಿ.3.7.1981 |
| 65 | ಉಪನ್ಯಾಸಕರು | 180 | ಇಡಿ:82:ಎಂಯುಎಸ್ 80:ದಿ.3.7.1981 |
| 66 | ದ್ವಿತೀಯ ದರ್ಜೆ ಸಹಿತ ಬೆರಳಚ್ಚುಗಾರರು | 30 | ಇಡಿ:82:ಎಂಯುಎಸ್ 80:ದಿ.3.7.1981 |
| 67 | ಸೇವಕ | 30 | ಇಡಿ:82:ಎಂಯುಎಸ್ 80:ದಿ.3.7.1981 |
| 68 | ಪ್ರಾಚಾರ್ಯರು | 2 | ಇಡಿ:82:ಎಂಯುಎಸ್ 80:ದಿ.3.7.1981 |
| 69 | ಉಪನ್ಯಾಸಕರು | 12 | ಇಡಿ:82:ಎಂಯುಎಸ್ 80:ದಿ.3.7.1981 |
| 70 | ದ್ವಿತೀಯ ದರ್ಜೆ ಸಹಾಯಕರು | 2 | ಇಡಿ:82:ಎಂಯುಎಸ್ 80:ದಿ.3.7.1981 |
| 71 | ಸೇವಕ | 2 | ಇಡಿ:82:ಎಂಯುಎಸ್ 80:ದಿ.3.7.1981 |
| 72 | ಪ್ರಾಚಾರ್ಯರು | 31 | ಇಡಿ:76:ಎಂಯುಎಸ್ 82:ದಿ.5.7.1982 |
| 73 | ಉಪನ್ಯಾಸಕರು | 186 | ಇಡಿ:76:ಎಂಯುಎಸ್ 82:ದಿ.5.7.1982 |
| 74 | ದ್ವಿತೀಯ ದರ್ಜೆ ಸಹಾಯಕರು | 31 | ಇಡಿ:76:ಎಂಯುಎಸ್ 82:ದಿ.5.7.1982 |
| 75 | ಸೇವಕ | 31 | ಇಡಿ:76:ಎಂಯುಎಸ್ 82:ದಿ.5.7.1982 |
| 76 | ಪ್ರಾಚಾರ್ಯರು | 8 | ಇಡಿ:76:ಎಂಯುಎಸ್ 82:ದಿ.5.7.1982 |

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ | ಹುದ್ದೆಗಳ ಸೃಜನೆಯ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|
| 77 | ಉಪನ್ಯಾಸಕರು | 42 | ಇಡಿ:76:ಎಂಯುಎಸ್ 82:ದಿ.5.7.1982 |
| 78 | ದ್ವಿತೀಯ ದರ್ಜೆ ಸಹಾಯಕರು | 8 | ಇಡಿ:76:ಎಂಯುಎಸ್ 82:ದಿ.5.7.1982 |
| 79 | ಸೇವಕ | 8 | ಇಡಿ:76:ಎಂಯುಎಸ್ 82:ದಿ.5.7.1982 |
| 80 | ಪ್ರಾಚಾರ್ಯರು | 1 | ಇಡಿ:76:ಎಂಯುಎಸ್ 82:ದಿ.5.7.1982 |
| 81 | ಉಪನ್ಯಾಸಕರು | 6 | ಇಡಿ:76:ಎಂಯುಎಸ್ 82:ದಿ.5.7.1982 |
| 82 | ದ್ವಿತೀಯ ದರ್ಜೆ ಸಹಾಯಕರು | 1 | ಇಡಿ:76:ಎಂಯುಎಸ್ 82:ದಿ.5.7.1982 |
| 83 | ಸೇವಕ | 1 | ಇಡಿ:76:ಎಂಯುಎಸ್ 82:ದಿ.5.7.1982 |
| 84 | ಪ್ರಾಚಾರ್ಯರು | 36 | ಇಡಿ:67:ಎಂಯುಎಸ್ 83:ದಿ.2.7.1983 |
| 85 | ಉಪನ್ಯಾಸಕರು | 224 | ಇಡಿ:67:ಎಂಯುಎಸ್ 83:ದಿ.2.7.1983 |
| 86 | ದ್ವಿತೀಯ ದರ್ಜೆ ಸಹಾಯಕರು | 36 | ಇಡಿ:67:ಎಂಯುಎಸ್ 83:ದಿ.2.7.1983 |
| 87 | ಸೇವಕ | 36 | ಇಡಿ:67:ಎಂಯುಎಸ್ 83:ದಿ.2.7.1983 |
| 88 | ಪ್ರಾಚಾರ್ಯರು | 1 | ಇಡಿ:67:ಎಂಯುಎಸ್ 83:ದಿ.2.7.1983 |
| 89 | ಉಪನ್ಯಾಸಕರು | 6 | ಇಡಿ:67:ಎಂಯುಎಸ್ 83:ದಿ.2.7.1983 |
| 90 | ದ್ವಿತೀಯ ದರ್ಜೆ ಸಹಾಯಕರು | 1 | ಇಡಿ:67:ಎಂಯುಎಸ್ 83:ದಿ.2.7.1983 |
| 91 | ಸೇವಕ | 1 | ಇಡಿ:67:ಎಂಯುಎಸ್ 83:ದಿ.2.7.1983 |
| 92 | ಪ್ರಾಚಾರ್ಯರು | 9 | ಇಡಿ:67:ಎಂಯುಎಸ್ 83:ದಿ.2.7.1983 |
| 93 | ಉಪನ್ಯಾಸಕರು | 54 | ಇಡಿ:67:ಎಂಯುಎಸ್ 83:ದಿ.2.7.1983 |
| 94 | ದ್ವಿತೀಯ ದರ್ಜೆ ಸಹಾಯಕರು | 9 | ಇಡಿ:67:ಎಂಯುಎಸ್ 83:ದಿ.2.7.1983 |
| 95 | ಸೇವಕ | 9 | ಇಡಿ:67:ಎಂಯುಎಸ್ 83:ದಿ.2.7.1983 |
| 96 | ಪ್ರಾಚಾರ್ಯರು | 61 | ಇಡಿ:74:ಎಂಯುಎಸ್ 84:ದಿ.9.7.1984 |
| 97 | ಉಪನ್ಯಾಸಕರು | 427 | ಇಡಿ:74:ಎಂಯುಎಸ್ 84:ದಿ.9.7.1984 |
| 98 | ದ್ವಿತೀಯ ದರ್ಜೆ ಸಹಾಯಕರು | 61 | ಇಡಿ:74:ಎಂಯುಎಸ್ 84:ದಿ.9.7.1984 |
| 99 | ಸೇವಕ | 61 | ಇಡಿ:74:ಎಂಯುಎಸ್ 84:ದಿ.9.7.1984 |
| 100 | ಪ್ರಾಚಾರ್ಯರು | 5 | ಇಡಿ:74:ಎಂಯುಎಸ್ 84:ದಿ.9.7.1984 |
| 101 | ಉಪನ್ಯಾಸಕರು | 35 | ಇಡಿ:74:ಎಂಯುಎಸ್ 84:ದಿ.9.7.1984 |
| 102 | ಪ್ರಥಮ ದರ್ಜೆ ಸಹಾಯಕರು | 5 | ಇಡಿ:74:ಎಂಯುಎಸ್ 84:ದಿ.9.7.1984 |
| 103 | ಸೇವಕ | 5 | ಇಡಿ:74:ಎಂಯುಎಸ್ 84:ದಿ.9.7.1984 |
| 104 | ಪ್ರಾಚಾರ್ಯರು | 4 | ಇಡಿ:74:ಎಂಯುಎಸ್ 84:ದಿ.9.7.1984 |
| 105 | ಉಪನ್ಯಾಸಕರು | 28 | ಇಡಿ:74:ಎಂಯುಎಸ್ 84:ದಿ.9.7.1984 |
| 106 | ಪ್ರಥಮ ದರ್ಜೆ ಸಹಾಯಕರು | 4 | ಇಡಿ:74:ಎಂಯುಎಸ್ 84:ದಿ.9.7.1984 |
| 107 | ಸೇವಕ | 4 | ಇಡಿ:74:ಎಂಯುಎಸ್ 84:ದಿ.9.7.1984 |
| 108 | ಪ್ರಾಚಾರ್ಯರು | 2 | ಇಡಿ:74:ಎಂಯುಎಸ್ 84:ದಿ.9.7.1984 |
| 109 | ಉಪನ್ಯಾಸಕರು | 14 | ಇಡಿ:74:ಎಂಯುಎಸ್ 84:ದಿ.9.7.1984 |
| 110 | ಪ್ರಥಮ ದರ್ಜೆ ಸಹಾಯಕರು | 2 | ಇಡಿ:74:ಎಂಯುಎಸ್ 84:ದಿ.9.7.1984 |
| 111 | ಸೇವಕ | 2 | ಇಡಿ:74:ಎಂಯುಎಸ್ 84:ದಿ.9.7.1984 |
| 112 | ಪ್ರಾಚಾರ್ಯರು | 3 | ಇಡಿ:74:ಎಂಯುಎಸ್ 84:ದಿ.9.7.1984 |
| 113 | ಉಪನ್ಯಾಸಕರು | 21 | ಇಡಿ:74:ಎಂಯುಎಸ್ 84:ದಿ.9.7.1984 |
| 114 | ಪ್ರಥಮ ದರ್ಜೆ ಸಹಾಯಕರು | 3 | ಇಡಿ:74:ಎಂಯುಎಸ್ 84:ದಿ.9.7.1984 |
| 115 | ಸೇವಕ | 3 | ಇಡಿ:74:ಎಂಯುಎಸ್ 84:ದಿ.9.7.1984 |
| 116 | ಪ್ರಾಚಾರ್ಯರು | 2 | ಇಡಿ:74:ಎಂಯುಎಸ್ 84:ದಿ.9.7.1984 |
| 117 | ಉಪನ್ಯಾಸಕರು | 14 | ಇಡಿ:74:ಎಂಯುಎಸ್ 84:ದಿ.9.7.1984 |

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ | ಹುದ್ದೆಗಳ ಸೃಜನೆಯ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|
| 118 | ಪ್ರಥಮ ದರ್ಜೆ ಸಹಾಯಕರು | 2 | ಇಡಿ:74:ಎಂಯುಎಸ್ 84:ದಿ.9.7.1984 |
| 119 | ಸೇವಕ | 2 | ಇಡಿ:74:ಎಂಯುಎಸ್ 84:ದಿ.9.7.1984 |
| 120 | ಪ್ರಾಚಾರ್ಯರು | 1 | ಇಡಿ:74:ಎಂಯುಎಸ್ 84:ದಿ.9.7.1984 |
| 121 | ಉಪನ್ಯಾಸಕರು | 7 | ಇಡಿ:74:ಎಂಯುಎಸ್ 84:ದಿ.9.7.1984 |
| 122 | ಪ್ರಥಮ ದರ್ಜೆ ಸಹಾಯಕರು | 1 | ಇಡಿ:74:ಎಂಯುಎಸ್ 84:ದಿ.9.7.1984 |
| 123 | ಸೇವಕ | 1 | ಇಡಿ:74:ಎಂಯುಎಸ್ 84:ದಿ.9.7.1984 |
| 124 | ಉಪನ್ಯಾಸಕರು | 300 | ಇಡಿ:74:ಎಂಯುಎಸ್ 84:ದಿ.9.7.1984 |
| 125 | ಉಪನ್ಯಾಸಕರು | 100 | ಇಡಿ:74:ಎಂಯುಎಸ್ 84:ದಿ.9.7.1984 |

**ಐ.ಎಫ್. ಮಾಗಿ**

ಪಿ.ಆರ್. 1084

ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ:** ಕರ್ನಾಟಕ ಪರೀಕ್ಷಾ ಘಟಕದಿಂದ ನಡೆಸಲ್ಪಡುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ವೃತ್ತಿ ಶಿಕ್ಷಣ ಕೋರ್ಸ್‌ಗಳಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸಾಲದ ಮೇಲೆ ಶೇ.6 ರಷ್ಟು ರಿಯಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** ದಿನಾಂಕ:17-07-2008ರ 2008-09ನೇ ಸಾಲಿನ ಆಯವ್ಯಯ ಭಾಷಣ

**ಪ್ರಸ್ತಾವನೆ :**

1) ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ರಾಜ್ಯದಲ್ಲಿ ಬಡ ಮತ್ತು ಕಡಿಮೆ ಆದಾಯ ಕುಟುಂಬಗಳಿಂದ ಬಂದ ವಿದ್ಯಾರ್ಥಿಗಳು, ಆರ್ಥಿಕ ಅಸಹಾಯತೆಯಿಂದ ತಮ್ಮ ವಿದ್ಯಾಭ್ಯಾಸ ವನ್ನು ಮುಂದುವರೆಸುವುದು ದುಸ್ತರವಾಗುತ್ತಿದೆ. ಬ್ಯಾಂಕ್‌ಗಳು ವಿವಿಧ ಯೋಜನೆಯಡಿ ಸಾಲ ಸೌಲಭ್ಯವನ್ನು ನೀಡುತ್ತಿದ್ದರೂ, ವಿದ್ಯಾರ್ಥಿಗಳು / ಪೋಷಕರು ಬ್ಯಾಂಕ್‌ಗಳಿಂದ ಸಾಲ ವನ್ನು ಪಡೆಯಲು ತುಂಬಾ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅಲ್ಲದೇ, ಬ್ಯಾಂಕ್‌ಗಳು ಶಿಕ್ಷಣ ಸಾಲದ ಮೇಲೆ ಅತಿಯಾಗಿ ಬಡ್ಡಿಯನ್ನು ಎಂದರೆ, ಶೇ. 11 ರಿಂದ 12 ರವರೆಗೆ ವಿಧಿಸುತ್ತಿರುತ್ತಾರೆ. ಆದುದರಿಂದ ಈ ಸಾಲದ ಹೊರೆಯನ್ನು ತಪ್ಪಿಸಲು ಮೇಲೆ ಓದಲಾದ 2008-09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಯವರು "ಬಡ ಕುಟುಂಬದ ಹಿನ್ನಲೆಯ ವಿದ್ಯಾರ್ಥಿಗಳು ಉನ್ನತ ವೃತ್ತಿ ಶಿಕ್ಷಣ ಸೌಲಭ್ಯದಿಂದ ವಂಚಿತರಾಗು ವುದನ್ನು ತಪ್ಪಿಸಲು ನನ್ನ ಸರ್ಕಾರವು ಯೋಜನೆಯೊಂದನ್ನು ಹಮ್ಮಿಕೊಳ್ಳಲಿದೆ. ಈ ಯೋಜನೆಯನ್ವಯ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು ವೃತ್ತಿ ಶಿಕ್ಷಣ ಕೋರ್ಸ್‌ಗಳಿಗೆ ಸೇರಲು ಶೇ. 6 ರ ಬಡ್ಡಿ ದರದಲ್ಲಿ ಸಾಲ ಪಡೆಯಲು ಸರ್ಕಾರ ದಿಂದ ಸಹಾಯಧನ ಒದಗಿಸಲಾಗುವುದು". ಎಂದು ಘೋಷಿಸಿರುತ್ತಾರೆ.

2) ಸದರಿ ವಿಷಯದ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ: 197 : ಯೋಯೋಕಾ 2008 ಬೆಂಗಳೂರು, ದಿನಾಂಕ: 08ನೇ ಸೆಪ್ಟೆಂಬರ್ 2008**

**[ಸ್ವೀಮರ:ಇಡಿ: 148 :(ಯುನಿಕ್) 2008, ದಿನಾಂಕ:08-09-2008]**

3) 2008-09ನೇ ಸಾಲಿನಿಂದ ಕರ್ನಾಟಕ ಪರೀಕ್ಷಾ ಘಟಕದಿಂದ ನಡೆಸಲ್ಪಡುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ವೃತ್ತಿ ಶಿಕ್ಷಣ ಕೋರ್ಸ್‌ಗಳಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿ ಗಳಿಗೆ ಶೈಕ್ಷಣಿಕ ಸಾಲದ ಮೇಲೆ ಶೇ.6ರಷ್ಟು ರಿಯಾಯಿತಿ ನೀಡುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಾಗೂ ಮೇಲ್ವಿಚಾರಣೆ ನಡೆಸಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ, ಈ ಕೆಳಕಂಡ ಷರತ್ತನ್ನು ವಿಧಿಸಿ ಅನುಮೋದನೆ ನೀಡಲಾಗಿದೆ.

**ಷರತ್ತುಗಳು:**

(ಅ). ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆ ಮುಖಾಂತರ ವೈದ್ಯಕೀಯ, ದಂತ, (ಇಂಡಿಯನ್ ಸಿಸ್ಟಮ್ಸ್ ಆಫ್ ಮೆಡಿಸಿನ್ ಅಂಡ್ ಹೋಮಿಯೋಪತಿ)ಭಾರತೀಯ ವೈದ್ಯ ಪದ್ಧತಿ ಹಾಗೂ ಹೋಮಿಯೋಪತಿ ಹಾಗೂ ಇಂಜಿನಿಯರಿಂಗ್ ಕೋರ್ಸ್‌ಗಳಿಗೆ ಪ್ರವೇಶ ಹೊಂದಿದ ಎಲ್ಲಾ ವಿದ್ಯಾರ್ಥಿಗಳು ಪಡೆಯಬಹುದಾದ ಶೈಕ್ಷಣಿಕ ಸಾಲಗಳಿಗೆ [Educational Loan] ಬಡ್ಡಿ ಸಹಾಯಧನ ನೀಡುವ ಕಾರ್ಯಕ್ರಮವನ್ನು ಜಾರಿಗೊಳಿಸುವುದು.

(ಆ). ಮೇಲಿನ ಕೋರ್ಸ್‌ಗಳ ಅಭ್ಯಾಸಕ್ಕಾಗಿ ವಿದ್ಯಾರ್ಥಿಗಳು ದಿನಾಂಕ: 1–8–2008 ರಂದು ಹಾಗೂ ನಂತರ ಪಡೆಯಲಾದ ಸಾಲಗಳಿಗೆ ಈ ಯೋಜನೆಯು ಅನ್ವಯವಾಗುತ್ತದೆ.

(ಇ). ವಿದ್ಯಾಭ್ಯಾಸದ ಅವಧಿಯಲ್ಲಿ ವಿಧಿಸಬಹುದಾದ ಬಡ್ಡಿಯ ಮಿಕ್ಕ ಭಾಗವನ್ನು ಬಡ್ಡಿ ಸಹಾಯಧನವನ್ನಾಗಿ ಭರಿಸುವ ಮೂಲಕ, ವಿದ್ಯಾರ್ಥಿಗಳ ಮೇಲೆ ವಿಧಿಸ ಬಹುದಾದ ಬಡ್ಡಿ ಹೊರೆಯನ್ನು ಗರಿಷ್ಠ ಶೇ.6 ರಷ್ಟಕ್ಕೆ ಸೀಮಿತಗೊಳಿಸಿ ವಿದ್ಯಾರ್ಥಿಯ ನಿಗಧಿತ ವ್ಯಾಸಂಗದ ಅವಧಿಗೆ ಮಾತ್ರ ಈ ಬಡ್ಡಿ ಸಹಾಯಾನುದಾನ ಕಾರ್ಯಕ್ರಮ ಜಾರಿಯಲ್ಲಿರುವುದು.

(ಈ). ಎಲ್ಲಾ ಕೋರ್ಸ್‌ಗಳಿಗೆ ಬಡ್ಡಿ ಸಹಾಯಧನವನ್ನು ಗರಿಷ್ಠ ಸಾಲ ಮೊತ್ತ 5.00 ಲಕ್ಷ ರೂ ಗಳಿಗೆ ಸೀಮಿತಗೊಳಿಸುವುದು.

(ಉ). ಮೊದಲನೇ ವರ್ಷದಲ್ಲಿ ಬಡ್ಡಿಯ ಸಹಾಯಾನುದಾನವನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಪ್ರಮಾಣ ಪತ್ರದ ಆಧಾರದ ಮೇಲೆ ಸಂಬಂಧಿಸಿದ ಬ್ಯಾಂಕ್ ಗಳಿಗೆ ನೇರವಾಗಿ ನೋಡಲ್ ಏಜೆನ್ಸಿಯು ಪಾವತಿ ಮಾಡತಕ್ಕದ್ದು.

(ಊ). ಎರಡನೇ ವರ್ಷದಿಂದ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿರುವ ಕಾಲೇಜಿನ ಮುಖ್ಯಸ್ಥರುಗಳು ನೀಡುವ ಪ್ರಮಾಣ ಪತ್ರ ಆಧಾರದ ಮೇಲೆ ಈ ಕೆಳಕಂಡ ಷರತ್ತಿಗೊಳಪಟ್ಟು ಬಡ್ಡಿಯ ಸಹಾಯಾನುದಾನವನ್ನು ನೇರವಾಗಿ ಬ್ಯಾಂಕ್ ಗಳಿಗೆ ಪಾವತಿಸತಕ್ಕದ್ದು.

(i) ವಿದ್ಯಾರ್ಥಿಯು ಕಾಲೇಜಿನಲ್ಲಿ ಅಭ್ಯಾಸವನ್ನು ಮುಂದುವರೆಸುತ್ತಿರಬೇಕು.

(ii) ಹಿಂದಿನ ವರ್ಷಗಳ ಪರೀಕ್ಷೆಯಲ್ಲಿ ಉತ್ತೀರ್ಣನಾಗಿರಬೇಕು.

4) ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರವನ್ನು ನೋಡಲ್ ಏಜೆನ್ಸಿಯಾಗಿ ನೇಮಿಸಲಾಗಿದೆ. ಈ ಸಂಸ್ಥೆಯು ವಿದ್ಯಾರ್ಥಿಗಳ ಅರ್ಹತೆಯನ್ನು ಪರೀಕ್ಷಿಸತಕ್ಕದ್ದು. ಈ ಸಂಸ್ಥೆಗೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರು ಅವಶ್ಯ ಕತೆಗೆ ಅನುಗುಣವಾಗಿ ಹಣವನ್ನು ಬಿಡುಗಡೆ ಮಾಡತಕ್ಕದ್ದು. ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ಬಿಡುಗಡೆ ಮಾಡಿದ ಮೊತ್ತವನ್ನು ಪ್ರತ್ಯೇಕ ಬ್ಯಾಂಕ್ ಖಾತೆಯಲ್ಲಿರಿಸಿ ಪ್ರಸ್ತಾವನೆಗಳು ಬಂದ ನಂತರ ನೇರವಾಗಿ ಸಂಬಂಧಿಸಿದ ಬ್ಯಾಂಕ್‌ಗಳಿಗೆ ಬಡ್ಡಿ ಸಹಾಯಾನುದಾನವನ್ನು ನೀಡಬಹುದಾಗಿದೆ.

5) ಇದಕ್ಕೆ ಸಂಬಂಧಿಸಿದ ವೆಚ್ಚಗಳನ್ನು 2008–09ನೇ ಸಾಲಿನ ಲೆಕ್ಕಶೀರ್ಷಿಕೆ:– 2202–03–800–1–04–106[ಯೋಜನೆ] ಯಡಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

6) ಈ ಆದೇಶವನ್ನು ಯೋಜನೆ ಮತ್ತು ಆರ್ಥಿಕ ಇಲಾಖೆಗಳು ಕ್ರಮವಾಗಿ ತಮ್ಮ ಅನಧಿ ಕೃತ ಟಿಪ್ಪಣಿ ಸಂಖ್ಯೆ PD 82 M&E 2008, ದಿನಾಂಕ: 26–08–2008 ಹಾಗೂ FD 840 Exp–8/07–2008, ದಿನಾಂಕ: 27–08–2008 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1297

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ [ಯೋಜನೆ]

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಸಮಗ್ರ ತುರ್ತುಸ್ಥಿತಿ ನಿರ್ವಹಣೆ ಪ್ರತಿಕ್ರಿಯೆ ಸೇವೆಗಳನ್ನು (ಆರೋಗ್ಯ ಕವಚ ಯೋಜನೆ) ಜಾರಿಗೆ ತರಲು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಲಹಾ ಸಮಿತಿಯನ್ನು ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆಕುಕ 10 ಎಸ್‌ಟಿಕ್ಯೂ 2007, ದಿನಾಂಕ 11–8–2008.

**ಪ್ರಸ್ತಾವನೆ :**

ರಾಜ್ಯದಲ್ಲಿ ತುರ್ತು ಸ್ಥಿತಿ ನಿರ್ವಹಣಾ ಪ್ರತಿಕ್ರಿಯೆ ಪದ್ಧತಿಯನ್ನು ಸಾರ್ವಜನಿಕ ಖಾಸಗಿ ಸಹ ಭಾಗಿತ್ವದಲ್ಲಿ ಜಾರಿಗೆ ತರಲು 2008–09ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಲಾಗಿದೆ. ಆಂದ್ರಪ್ರದೇಶದ ಮಾದರಿಯಲ್ಲಿ ಇರುವಂತೆ ಸದರಿ ಯೋಜನೆಯನ್ನು ಆರೋಗ್ಯ ಕವಚ ಎಂಬುದಾಗಿ ರಾಜ್ಯದಲ್ಲಿ ಜಾರಿಗೊಳಿಸಲು ಉದ್ದೇಶಿಸಿ, ಇದಕ್ಕಾಗಿ ಇ.ಎಂ.ಆರ್.ಐ. ಸಂಸ್ಥೆ, ಸಿಕಂದರಾಬಾದ್ ಇವರ ಜೊತೆ ಸಹಭಾಗಿತ್ವದೊಡನೆ ರಾಜ್ಯಾದ್ಯಂತ ಜಾರಿಗೊಳಿಸಲು ವಿವರವಾದ ಸೂಚನೆಗಳನ್ನು ನೀಡುವ ಮೂಲಕ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ. ಇ.ಎಂ.ಆರ್.ಐ. ಸಂಸ್ಥೆಯು

ಆರೋಗ್ಯ ಕವಚ ಯೋಜನೆಯನ್ನು ಜಾರಿಗೊಳಿಸಲು ನೋಡಲ್ ಏಜೆನ್ಸಿ ಎಂಬುದಾಗಿ ಘೋಷಿಸಲಾಗಿದ್ದು, ಕರ್ನಾಟಕ ಸರ್ಕಾರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹಾಗೂ ಇ.ಎಂ.ಆರ್.ಐ. ಯೊಡನೆ ಒಂದು ಒಡಂಬಡಿಕೆಯನ್ನು ದಿನಾಂಕ 14–8–2008ರಂದು ಸಹಿ ಮಾಡಲಾಗಿದೆ. ಸದರಿ ಒಡಂಬಡಿಕೆಯಲ್ಲಿನ ಷರತ್ತುಗಳಲ್ಲಿ ರಾಜ್ಯ ಸರ್ಕಾರವು ಈ ಯೋಜನೆಯ ಬಂಡವಾಳ ಮತ್ತು ಆಪರೇಷನ್ ವೆಚ್ಚಕ್ಕಾಗಿ ರೂ. 10–00 ಕೋಟಿ (ಹತ್ತು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಮುಂಗಡವಾಗಿ ಒಡಂಬಡಿಕೆ ಸಹಿಯಾದ ದಿನದಂದು ಇ.ಎಂ.ಆರ್.ಐ. ಸಂಸ್ಥೆಗೆ ಚೆಕ್ ಮೂಲಕ ನೀಡಲಾಗಿರುತ್ತದೆ.

ಈ ಯೋಜನೆಯನ್ನು ಜಾರಿಗೊಳಿಸಲು ಯಾವುದಾದರೂ ಪ್ರಮುಖ ಸಮಸ್ಯೆಗಳು ಉಂಟಾದಲ್ಲಿ ಅವುಗಳ ಬಗ್ಗೆ ತೀರ್ಮಾನಿಸಲು ಹಾಗೂ ಯೋಜನೆಯನ್ನು ಸುಸೂತ್ರವಾಗಿ ಜಾರಿಗೊಳಿಸುವಲ್ಲಿ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ಒಂದು ಸಲಹಾ ಸಮಿತಿಯನ್ನು ಹಾಗೂ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಬೇಕೆಂದು ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಲಾಗಿದೆ. ಅದರಂತೆ ಸಮಿತಿಗಳನ್ನು ರಚಿಸಲು ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 12 ಎಸ್‌ಟಿಕ್ಯೂ 2008(ಭಾ–4), ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸಮಗ್ರ ತುರ್ತುಸ್ಥಿತಿ ನಿರ್ವಹಣೆ ಪ್ರತಿಕ್ರಿಯೆ ಸೇವೆಗಳನ್ನು (ಆರೋಗ್ಯ ಕವಚ ಯೋಜನೆ)ಯನ್ನು ಜಾರಿಗೆ ತರಲು ಸರ್ಕಾರದ ಮುಖ್ಯ ಕಾರ್ಯದರ್ಶಿ ರವರ ಅಧ್ಯಕ್ಷತೆಯಲ್ಲಿ ಸಲಹಾ ಸಮಿತಿಯನ್ನು ಹಾಗೂ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ನೇಮಿಸಲು ಸರ್ಕಾರವು ಆದೇಶಿಸಿದೆ.

**I. ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಿರುವ ಸಲಹಾ ಸಮಿತಿ:**

| | | |
|---|---|---|
| 1 | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿಗಳು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸಂಚಾಲಕರು |
| 3 | ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗೃಹ ಇಲಾಖೆ | ಸದಸ್ಯರು |
| 5 | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ಸದಸ್ಯರು |
| 6 | ಕಾರ್ಯನಿರ್ವಾಹಕ ಅಧಿಕಾರಿ,<br>ಇ.ಎಂ.ಆರ್.ಐ. ರವರು ನಾಮ ನಿರ್ದೇಶಿಸಲ್ಪಡುವ ನಾಲ್ವರು | ಸದಸ್ಯರು |

**II. ಪ್ರತಿ ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳು ರವರ ಅಧ್ಯಕ್ಷತೆಯಲ್ಲಿ ನೇಮಿಸಿರುವ ಸಮಿತಿ:**

| | | |
|---|---|---|
| 1 | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಪೊಲೀಸ್ ಆಯುಕ್ತರು | ಸದಸ್ಯರು |
| 3 | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ | ಸದಸ್ಯರು |
| 4 | ಜಿಲ್ಲಾ ಶಸ್ತ್ರಚಿಕಿತ್ಸಕರು | ಸದಸ್ಯರು |
| 5 | ಮುಖ್ಯ ಕಾರ್ಯನಿರ್ವಹಣಾಧಿಕಾರಿ,<br>ತುರ್ತು ನಿರ್ವಹಣಾ ಸಂಶೋಧನಾ ಸಂಸ್ಥೆ, ಸಿಕಂದರಾಬಾದ್,<br>ರವರ ಇಬ್ಬರು ಸದಸ್ಯರು | ಸದಸ್ಯರು |

1) ಮೇಲೆ ತಿಳಿಸಿರುವ ಸಲಹಾ ಸಮಿತಿ ಪ್ರತಿ 3 ತಿಂಗಳಿಗೊಮ್ಮೆ ಸಭೆ ಸೇರುವುದು "ಸಲಹಾ ಸಮಿತಿ"ಯು ನೀಡುವ ಶಿಫಾರಸ್ಸುಗಳು ಕಡ್ಡಾಯವಾಗಿರುತ್ತದೆ.
2) ಜಿಲ್ಲಾ ಮಟ್ಟದ ಸಮಿತಿಯು ಆಗಿದಾಂಗ್ಯೆ ಸಭೆ ಸೇರಿ ಯೋಜನೆ ಜಾರಿಗೊಳಿಸುವ ಬಗ್ಗೆ ಪರಾಮಾರ್ಶಿಸಿ ಕ್ಷೇತ್ರ ಮಟ್ಟದಲ್ಲಿನ ಸಮಸ್ಯೆಗಳನ್ನು ಪರಿಹರಿಸಲು ಕ್ರಮಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1306

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## EDUCATION SECRETARIAT

**Sub :** Constitution of Karnataka Knowledge Commission-Reg.

**Preamble:**

With the presence of various educational institutions, universities, institutions of national importance, scientific establishments, R&D institutions and knowledge oriented industries the knowledge infrastructure in Karnataka is very robust and also expanding in the recent years. In this backdrop, an appropriate initiative is acquired to respond to the challenges of the knowledge era in a proactive manner. It is in this context that in the State Budget for the year 2008-2009, it has been announced that the Knowledge Commission will be constituted in the State.

In the above context, the Karnataka Knowledge Commission is to be established with the focus areas of literacy and education in all their ramifications open and distance education, science and technology, industry, entrepreneurship, innovation, traditional knowledge, agriculture, e-governance, rural development etc and other relevant areas in the context of Karnataka.

Further, to enable the state to develop as a vibrat knowledge society and to entail the radical improvement in existing systems of knowledge, creating avenues for generating new forms of knowledge and in particular:

i) To strengthen the education system, promote domestic research and innovation, and facilitate knowledge application in sectors like health, agriculture, rural development and industry,

ii) Leverage information and communication technologies to enhance governance and improve connectivity,

iii) Devise mechanisms for exchange and interaction between knowledge systems in the global arena,

It is felt that a Knowledge Commission for Karnataka is necessary and desirable. Such a Commission would also make policy recommendations to strengthen and promote the knowledge economy of Karnataka.

In view of the above Government has decided to constitute a Karnataka Knowledge Commission. Hence, this order.

**Government Order No. ED 110 URC 2008, Bangalore, Dated 5th September 2008**

In the above circumstances, Government of Karnataka are pleased to constitute Karnataka Knowledge Commission in the State with the following Chairman and members:

| Sl. No. | Name and address | Designation |
|---|---|---|
| 1 | Dr. Kasturi Rangan, Member, Rajya Sabha, Parliament, New Delhi, Director, National Institute of Advanced Studies. | Chairman |
| 2 | Dr. M.K. Sridhar, Reader, Canara Bank School of Management Studites, Bangalore University, Bangalore | Member |
| 3 | Dr. V.B. Kutinho, Former Vice-Chancellor, Gulbarga | Member |
| 4 | Dr. Nayana Tara, Bangalore Institute of Management, Bangalore | Member |
| 5 | Dr. Ramachandra Bhatt Kotemane, Janaseva Trust | Member |
| 6 | Dr. Nagaratna, Vivekananda Yuva Kendra, Bangalore | Member |

**Ex. Officio Members**

| | | |
|---|---|---|
| 7 | Additional Chief Secretary and Development Commissioner, Government of Karnataka, Bangalore. | Member |
| 8 | Principal Secretary to Government, Education Department (Higher Education) | Convener |

| Sl. No. | Name and address | Designation |
|---|---|---|
| 9 | Principal Secretary to Government, Planning Department, Bangalore | Member |
| 10 | Principal Secretary to Government, Information Technology and Bio Technology, Science and Technology Deparment, Bangalore | Member |
| 11 | Secretary to Government, Education Department (Primary and Secondary), Bangalore | Member |
| 12 | Director, Indian Institute of Science, Bangalore | Member |
| 13 | Director, Indian Institute of Business Management, Bangalore | Member |
| 14 | Director, Institute for Social and Economic Change, Bangalore | Member |
| 15 | Director, National Institute of Advanced Studies, Bangalore | Member |
| 16 | Director, Indian Institute of Industrial Training-B-IITB, Bangalore | Member |
| 17 | Vice-Chancellor, Agriculture University, Bangalore | Member |
| 18 | Vice-Chancellor, Bangalore University, Bangalore | Member |
| 19 | Vice-Chancellor, Karnatak University, Dharwad | Member |
| 20 | Vice-Chancellor, Visveswaraya Technological University, Belgaum | Member |
| 21 | Vice-Chancellor, Gulbarga University, Gulbarga | Member |
| 22 | Vice-Chancellor, Mysore University, Myosre | Member |
| 23 | Vice-Chancellor, Karnataka State Women University, Bijapur | Member |

The terms of reference of the Karnataka Knowledge Commission (KKC) are as follows:

1. Building excellence in the educational system to meet the knowledge challengers of the 21st century and increase Karnataka's competitive advantage in the fields of knowledge.
2. Promote knowledge in all formal and non-formal educational, scientific and knowledge institutions of Karnataka.
3. Improve the leadership and management of educational and knowledge institutions of Karnataka.
4. Promote knowledge applications in agriculture, rural development, health industry and other areas.
5. Enhance the use of knowledge capabilities in making government an effective service provider to the citizen and promote widespread sharing of knowledge to maximize public benefit.
6. To promote inter sectoral interaction and interface with the objective of preservation, access, new concepts, creation, application, dissemination, outreach and services relating to knowledge.

The term of the Karnataka Knowledge Commission will be three years and it shall submit quarterly, half yearly and annual reports to the Government and to the departments.

The performance and review of the Karnataka Knowledge Commission will be:

i. Schedules need to be drawn and made known in advance for various terms of reference and focus areas.
ii. Submission of quarterly, half yearly and annual reports with highly operational suggestions for implementation by various departments.
iii. Annual review meeting under the Chairmanship of the Chief Minister.

The Karnataka Knowledge Commission shall be assisted by an Executive Director and a team of staff who shall be appointed on deputation/contract basis.

By order and in the name of the Governor of Karnataka,

PR. 1299

**B.S. JAPALI**

Deputy Secretary to Government,

Education Department (Universities)